ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಬುಧವಾರ, ದಿನಾಂಕ: 17ನೇ ಜುಲೈ, 2019

ರಾಜ್ಯದಲ್ಲಿ ಈವರೆಗೆ ಒತ್ತುವರಿಯಾಗಿರುವ ಗೋಮಾಳಗಳ ಕುರಿತು

ಶ್ರೀ ಹೆಚ್.ಎಂ. ರಮೇಶ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು):-

247 (340) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ಈವರೆಗೆ ಒತ್ತುವರಿಯಾಗಿರುವ ಗೋಮಾಳಗಳ

ಸಂಖ್ಯೆ ಎಷ್ಟು ; ಒತ್ತುವರಿಯಾದ ಗೋಮಾಳಗಳನ್ನು

ಹಿಂಪಡೆಯಲಾಗಿದೆಯೇ ; ಒತ್ತುವರಿದಾರರ ವಿರುದ್ಧ ಯಾವ ಕ್ರಮಕೈಗೊಳ್ಳಲಾಗಿದೆ ; (ವಿವರ ನೀಡುವುದು)

(ಆ) ರಾಜ್ಯದ ಬಹುತೇಕ ತಾಲ್ಲೂಕು ಕಛೇರಿಗಳಲ್ಲಿ ರೈತರ ಆರ್.ಟಿ.ಸಿ.ಯಲ್ಲಿ ಬೆಳೆ ನೋಂದಾವಣಿ, ಪಹಣಿ ನೋಂದಾವಣಿ ಮುಂತಾದ ಕೆಲಸಗಳು ಸುಸೂತ್ರವಾಗಿ ಆಗುತ್ತಿಲ್ಲ ಎನ್ನುವ ದೂರುಗಳು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಯಾವ ಕ್ರಮ ಕೈಗೊಳ್ಳಲಾಗಿದೆ ;

(ಇ) ತಾಲ್ಲೂಕು ಕಛೇರಿಯ ಭೂಮಿ ಕೇಂದ್ರವನ್ನು ಖಾಸಗಿ ನಿರ್ವಹಣೆಗೆ ಕೊಡಬೇಕೆನ್ನುವ ಆಗ್ರಹ ಕೇಳಿ ಬಂದಿದ್ದು ಈ ಕುರಿತು ಸರ್ಕಾರದ ನಿಲುವೇನು ;

(ಈ) ತಾಲ್ಲೂಕು ಹೋಬಳಿ ಕೇಂದ್ರಗಳ ವ್ಯಾಪ್ತಿಯಲ್ಲಿ ಜಮೀನುಗಳ ಸರ್ವೆ ಕಾರ್ಯ ಸಮರ್ಪಕವಾಗಿ ನಡೆಯುತ್ತಿಲ್ಲ ಎನ್ನುವ ಆರೋಪಗಳು ಕೇಳಿ ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಸರ್ವೆ ಅಧಿಕಾರಿಗಳ ನೇಮಕಾತಿ ಪ್ರಕ್ರಿಯೆ ಈಗ ಯಾವ ಹಂತದಲ್ಲಿದೆ ?